# ಯಜ್ಞೋಪವೀತ ಧಾರಣವಿಧಿ

ಉಪಾಕರ್ಮದಲ್ಲಿ ಪ್ರತ್ಯಕ್ಷವಾಗಿ ಭಾಗವಹಿಸಿ ಜನಿವಾರವನ್ನು ಧರಿಸಬೇಕು. ಬೇರೆ ದಿನಗಳಲ್ಲಿ ಜನಿವಾರ ಬದಲಾವಣೆಗಾಗಿ ಈ ಕೆಳಗಿನ ಪದ್ಧತಿಯನ್ನು ಧರಿಸಬೇಕು. ಆದರೆ ಕೆಲವರಿಗೆ ಕೆಲವು ಅನಿವಾರ್ಯ ಕಾರಣಗಳಿಂದಾಗಿ ಉಪಾಕರ್ಮದಲ್ಲಿ ಭಾಗವಹಿಸಲು ಅಸಾಧ್ಯವಾಗಿರುತ್ತದೆ. ಅಂತಹವರಿಗೆ ಉಪಯೋಗವಾಗುವಂತೆ ಈ ಕೆಳಗಿನ ಲೇಖನವನ್ನು ಬರೆಯಲಾಗಿದೆ.

ಜನಿವಾರವನ್ನು ಯಾವಾಗ ಬದಲಾಯಿಸಬೇಕು ?

೧. ಮೃತಾಶೌಚ ನಂತರ
೨. ಜಾತಾಶೌಚ ನಂತರ
೩. ಮೃತದೇಹ ಸ್ಪರ್ಶ ಮಾಡಿ ಸ್ನಾನಾನಂತರ
೪. ಅಕಸ್ಮಾತ್ ರಜಸ್ವಲದೋಷವಿರುವರನ್ನು ಸ್ಪರ್ಶ ಮಾಡಿದಾಗ
೫. ಅನ್ಯಜಾತಿಯ ಜನರನ್ನು ಸ್ಪರ್ಶಮಾಡಿದಾಗ
೬. ಜನಿವಾರದ ಎಳೆಗಳು ಕಡಿದಾಗ

ಜನಿವಾರದ/ಯಜ್ಞೋಪವೀತದ ಬಗ್ಗೆ ಕೆಲವು ವಿಷಯುಗಳು–

೧. ಜನಿವಾರ ಬ್ರಾಹ್ಮಣತ್ವದ ಸೂಚಕ
೨. ವೇದ ಶಾಸ್ತ್ರಾದಿ ಅಭ್ಯಾಸಕ್ಕೆ ಜನಿವಾರದ ಧಾರಣೆ ಅವಶ್ಯಕ.
೩. ಇದು ಬರೀ ಬೆನ್ನು ಉಜ್ಜುವ ಸಾಧನವಲ್ಲ.
೪. ಸನ್ಯಾಸಿಗಳಿಗೆ ಜನಿವಾರ ಧಾರಣ ಅನವಶ್ಯಕ
೫. ನಮ್ಮ ನಿತ್ಯ ಕರ್ಮಾನುಷ್ಠಾನ ಯೋಗ್ಯತೆ ಸಿದ್ಧ್ಯರ್ಥ ಜನಿವಾರ ಅವಶ್ಯಕ
೬. ಮನುಸ್ಮೃತಿಯ ಪ್ರಕಾರ ಬ್ರಾಹ್ಮಣನು ಜನಿವಾರವಿಲ್ಲದೇ ಏನನ್ನೂ ಮಾಡುವಂತಿಲ್ಲ
೭. ಜನಿವಾರ ಮೂರು ಎಳೆಗಳು – ಮೂರು ವೇದಗಳನ್ನು, ಬ್ರಹ್ಮ–ವಿಷ್ಣು–ಮಹೇಶ್ವರರನ್ನೂ, ಸತ್ತ್ವ–ರಜಸ್–ತಮೋ ಗುಣದ ಸೂಚಕ
೮. ಜನಿವಾರದ ಒಂಭತ್ತು ತಂತುಗಳಲ್ಲಿ ಓಂಕಾರ, ಅಗ್ನಿ, ನಾಗ, ಚಂದ್ರ, ಪಿತ್ರುದೇವತೆಗಲು, ಪ್ರಜಾಪತಿ, ವಾಯು, ಸೂರ್ಯ, ಮತ್ತು ವಿಶ್ವೇದೇವತೆಗಳ ಸನ್ನಿಧಾನವಿರುತ್ತದೆ.

# ಯಜ್ಞೋಪವೀತ ಧಾರಣ ವಿಧಿ

## ೧.ಆಚಮನ

ಓಂ ಶ್ರೀ ಕೇಶವಾಯ ಸ್ವಾಹಾ ।
ಓಂ ಶ್ರೀ ನಾರಾಯಣಾಯ ಸ್ವಾಹಾ ।
ಓಂ ಶ್ರೀ ಮಾಧವಾಯ ಸ್ವಾಹಾ ।
ಓಮ್ ಗೋವಿಂದಾಯ ನಮ: । ..........ಇತ್ಯಾದಿ
ಚತುರ್ವಿಂಶತಿ ನಾಮಗಳನ್ನು ಧ್ಯಾನಿಸುವುದು.

## ೨. ಪ್ರಾಣಾಯಾಮ :

ಪ್ರಣವಸ್ಯ ಪರಬ್ರಹ್ಮ ಋಷಿ: ಪರಮಾತ್ಮಾ ದೇವತಾ ।
ದೇವೀ ಗಾಯತ್ರೀ ಛಂದ: ಪ್ರಾಣಾಯಾಮೇ ವಿನಿಯೋಗ: ।
ಓಂ ಭೂ: । ಓಂ ಭುವ: । ಓಂ ಸ್ವ: । ಓಂ ಮಹ: ।
ಓಂ ಜನ: । ಓಂ ತಪ: । ಓಂ ಸತ್ಯಂ ।

ಓಂ ತತ್ಸವಿತುರ್ವರೇಣ್ಯಂ । ಭರ್ಗೋ ದೇವಸ್ಯ ಧೀಮಹಿ ।
ಧಿಯೋ ಯೋ ನ: ಪ್ರಚೋದಯಾತ್ ।
ಓಮಾಪೋ ಜ್ಯೋತೋರಸೋಮೃತಂ
ಬ್ರಹ್ಮ ಭೂರ್ಭುವಸ್ವರೋಮ್ ।

# ಸಂಕಲ್ಪ –

ಶುಭೇಶೋಭನೇ ಮುಹೂರ್ತೇ ಆದ್ಯ ಬ್ರಹ್ಮಣ: ದ್ವಿತೀಯಪರಾರ್ಧೇ, ಶ್ರೀ ಶ್ವೇತವರಾಹಕಲ್ಪೇ, ವೈವಸ್ವತ ಮನ್ವಂತರೇ, ಅಷ್ಟಾವಿಂಶತಿತಮೇ ಕಲಿಯುಗೇ, ಪ್ರಥಮಪಾದೇ, ಭರತವರ್ಷೇ, ಜಂಬೂದ್ವೀಪೇ, ಭರತಖಂಡೇ, ದಂಡಕಾರಣ್ಯೇ, ಗೋದಾವರ್ಯಾ: ದಕ್ಷಿಣೇ ತೀರೇ, ಶಾಲೀವಾಹನ ಶಕೇ, ಬೌದ್ಧಾವತಾರೇ, ರಾಮಕ್ಷೇತ್ರೇ, ಅಸ್ಮಿನ್ವರ್ತಮಾನೇ,_________ಸಂವತ್ಸರೇ,__________ ಆಯನೇ,_____________ಋತೌ, ________________ಮಾಸೇ, ಶುಕ್ಲ/ಕೃಷ್ಣ ಪಕ್ಷೇ _______ತಿಥೌ,_________ವಾಸರೇ,_______ನಕ್ಷತ್ರೇ, ಶುಭಯೋಗ, ಶುಭಕರಣ, ಏವಂಗುಣ ವಿಶೇಷಣ ವಿಶಿಷ್ಟಾಯಾಂ ಶುಭತಿತೌ, ಶ್ರೀಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀ ವೇದವ್ಯಾಸ ಪ್ರೇರಣಯಾ ಶ್ರೀ ವೇದವ್ಯಾಸಪ್ರೀತ್ಯರ್ಥಂ ಶ್ರೌತ ಸ್ಮಾರ್ತ ಕರ್ಮಾನುಷ್ಠಾನ ಯೋಗ್ಯತಾಸಿದ್ಧ್ಯರ್ಥಂ, ಯಜ್ಞೋಪವೀತ ಧಾರಣಮಹಂ ಕರಿಷ್ಯೇ । ತದಾದೌ ಯಜ್ಞೋಪವೀತ ಸಂಸ್ಕಾರಂ ಕರಿಷ್ಯೇ ।

ಅಂಗಡಿಯಿಂದ ತಂದ ಜನಿವಾರವನ್ನು ನೇರವಾಗಿ ಧಾರಣ ಮಾಡಬಾರದು. ಅದಕ್ಕೆ ಸಂಸ್ಕಾರ ಮಾಡಿಯೇ ಉಪಯೋಗಿಸಬೇಕು.

ಭೂಮಿಯಲ್ಲಿ ಮಂಡಲ ಮಾಡಿ ತಟ್ಟೆಯಲ್ಲಿ ಜನಿವಾರವನ್ನಿಟ್ಟು

ಓಂ ಸ್ಯೋನಾ ಪೃಥಿವೀ ಭವಾನೃಕ್ಷರಾ ನಿವೇಶನಿ ।
ಯಚ್ಛಾ ನಃ ಶರ್ಮ ಸಪ್ರಥ । (ಮಂತ್ರದಿಂದ)

ನಂತರ ಗಾಯತ್ರಿ ಮಂತ್ರದಿಂದ ಜನಿವಾರವನ್ನು ಅಭಿಮಂತ್ರಿಸಬೇಕು.

ಆಪೋ ಹಿ ಷ್ಠಾ ಮಹೋಭುವಸ್ತಾನ ಊರ್ಜೇ ದಧಾತನ :। ಮಹೇರಣಾಯ ಚಕ್ಷಸೇ ।
ಮಂತ್ರದಿಂದ ಜನಿವಾರವನ್ನು ಪ್ರೋಕ್ಷಿಸುವುದು.

## ಪ್ರಾಣ ಪ್ರತಿಷ್ಠಾಪನೆ –

ಜನಿವಾರವನ್ನು ಮುಟ್ಟಿ ಈ ಕೆಳಗಿನ ಮಂತ್ರದಿಂದ ಪ್ರಾಣಪ್ರತಿಷ್ಟೆ ಮಾಡಬೇಕು

ಓಂ ಅಸುನೀತೇ ಪುನರಸ್ಮಾಸು ಚಕ್ಷು ಪುನಃ
ಪ್ರಾಣಮಿಹನೋದೇಹಿ ಭೋಗಂ ।
ಜ್ಯೋಕ್ ಪಶ್ಯೇಮ ಸೂರ್ಯಮುಚ್ಚರಂತ
ಮನುಮತೇ ಮೃಳಯಾ ನಃ ಸ್ವಸ್ತಿ ।

ಇತಿ ಪ್ರಾಣಪ್ರತಿಷ್ಠಾಪನಂ ಕೃತ್ವಾ
“ಓಂ ನಮೋ ನಾರಾಯಣಾಯ ಓಂ” ಎಂದು
ಎಂಟು ಭಾರಿ ಜಪಿಸುವುದು
ಬ್ರಹ್ಮಾದಿ ನವತಂತು ದೇವತೆಗಳ ಆವಾಹನ ಮಾಡುವುದು –

ಬ್ರಹ್ಮಜಜ್ಞಾನಂ, ನಕುಲ:, ಬ್ರಹ್ಮಾ, ತ್ರಿಷ್ಟುಪ್ ಬ್ರಹ್ಮಾ,
ತ್ರಿಷ್ಟುಪ್ ಬ್ರಹ್ಮಾವಾಹನೇ ವಿನಿಯೋಗ: ।
ಓಂ ಬ್ರಹ್ಮಜಜ್ಞಾನಂ ಪ್ರಥಮಂ ಪುರಸ್ತಾದ್
ವಿಸೀಮತ: ಸುರುಚೋವೇನ ಆವ: ।
ಸಬುಧ್ನ್ಯಾ ಉಪಮಾ ಅಸ್ಯ ವಿಷ್ಠಾಸ್ಸತಶ್ಚ
ಯೋನಿಮಸತಶ್ಚ ವಿವ: ॥
ಸೂತ್ರೋತ್ಪಾದಕಂ ಬ್ರಹ್ಮಾಣಮ್ ತದಂತರ್ಯಾಮಿಣಂ
ವಿಷ್ಣುಂ ಆವಾಹಯಾಮಿ ॥
(ಬ್ರಹ್ಮದೇವರನ್ನು ಆಹ್ವಾನಿಸುವುದು)

ಓಂತ್ರ್ಯಂಬಕಂಯಜಾಮಹೇ ಸುಗಂಧಿಂ ಪುಷ್ಟಿವರ್ಧನಂ ।
ಉರ್ವಾರುಕಮಿವ ಬಂಧನಾನ್ ಮೃತ್ಯೋರ್ಮುಕ್ಷೀಯ
ಮಾಮೃತಾತ್ ॥

ಓಂ ರುದ್ರಾಯ ನಮ: । ತದ್ಗ್ರಂಥಿದಾತಾರಂ ರುದ್ರಂ
ತದಂತರ್ಯಾಮಿಣಂ ಶ್ರೀಸಂಕರ್ಷಣಂ ಆವಾಹಯಾಮಿ॥
ಇದಂ ವಿಷ್ಣುರ್ಮೇಧಾತಿಥಿ: ವಿಷ್ಣುರ್ಗಾಯತ್ರೀ
(ರುದ್ರದೇವರನ್ನು ಆಹ್ವಾನಿಸುವುದು)

ಓಂ ಇದಂ ವಿಷ್ಣುರ್ವಿಚಕ್ರಮೇ ತ್ರೇಧಾ ನಿದಧೇ ಪದಂ ।
ಸಮೂಳ್ಹಮಸ್ಯ ಪಾಂಸುರೇ ।
ಓಂ ವಿಷ್ಣವೇ ನಮ: ವಿಷ್ಣುಮಾವಾಹಯಾಮಿ ॥
(ವಿಷ್ಣುಪರಮಾತ್ಮನನ್ನು ಆಹ್ವಾನಿಸುವುದು)

ಪ್ರಥಮತಂತೌ ಓಂಕಾರಂ ಆವಾಹಯಾಮಿ ।
ದ್ವಿತೀಯತಂತೌ ಅಗ್ನಿಂ ಆವಾಹಯಾಮಿ ।
ತೃತೀಯತಂತೌ ನಾಗಾನ್ ಆವಾಹಯಾಮಿ ।
ಚತುರ್ಥತಂತೌ ಸೋಮಂ ಆವಾಹಯಾಮಿ ।
ಪಂಚಮತಂತೌ ಪಿತೃಣ್ ಆವಾಹಯಾಮಿ ।
ಷಷ್ಟತಂತೌ ಪ್ರಜಾಪತಿಂ ಆವಾಹಯಾಮಿ ।
ಸಪ್ತಮತಂತೌ ವಾಯುಂ ಆವಾಹಯಾಮಿ ।
ಅಷ್ಟಮತಂತೌ ಸೂರ್ಯಂ ಆವಾಹಯಾಮಿ ।
ನವಮತಂತೌ ವಿಶ್ವೇದೇವಾನ್ ಆವಾಹಯಾಮಿ ॥

(ಹೀಗೆ ಓಂಕಾರ, ಅಗ್ನಿ, ನಾಗ, ಚಂದ್ರ, ಪಿತೃದೇವತೆಗಳು, ಪ್ರಜಾಪತಿ,  ವಾಯು, ಸೂರ್ಯ, ಮತ್ತು ವಿಶ್ವೇದೇವತೆಗಳನ್ನು ಒಂಬತ್ತು ತಂತುಗಳಲ್ಲಿ ಆಹ್ವಾನಿಸುವುದು)

**ದೋರಕದಲ್ಲಿ ಆಹ್ವಾನ**

ಪ್ರಥಮದೋರಕೇ ಋಗ್ವೇದಂ ಆವಾಹಯಾಮಿ ।
ದ್ವಿತೀಯದೋರಕೇ ಯಜುರ್ವೇದಂ ಆವಾಹಯಾಮಿ ।
ತೃತೀಯದೋರಕೇ ಸಾಮವೇದಂ ಆವಾಹಯಾಮಿ ।
(ಹೀಗೆ ಋಗ್, ಯಜುರ್, ಸಾಮವೇದಾದಿಗಳನ್ನು ಆಹ್ವಾನಿಸುವುದು)

**ಷೋಡಶೋಪಚಾರ ಪೂಜಾ –**

ಯಜ್ಞೋಪವೀತಕ್ಕೆ ಷೋಡಶೋಪಚಾರ ಪೂಜೆ ಮಾಡುವುದು, ಜನಿವಾರವನ್ನು ಸೂರ್ಯನಿಗೆ ತೋರಿಸುವುದು

"ಓಂಉದುತ್ಯಂ ಜಾತವೇದಸಂ ದೇವಂ ವಹಂತಿ ಕೇತವಃ।
ದೃಶೇ ವಿಶ್ವಾಯ ಸೂರ್ಯಂ ॥ (ಈ ಮಂತ್ರದಿಂದ ಸೂರ್ಯನಿಗೆ ಜನಿವಾರವನ್ನು ದರ್ಶನ ಮಾಡಿಸುವುದು)

(ಇದಿಷ್ಟೂ ಕಾರ್ಯಗಳನ್ನು ಮಾಡಿದರೆ ಮಾತ್ರ ಜನಿವಾರ ಧಾರಣೆಗೆ ಯೋಗ್ಯವಾಗುವುದು)

**ವಾಮನ ರೂಪಿ ಪರಮಾತ್ಮನ ಚಿಂತನೆ**

ಅಜಿನದಂಡ ಕಮಂಡಲುಮೇಖಲಾ
ರುಚಿರಪಾವನ ವಾಮನಮೂರ್ತಯೇ ।
ಮಿತಜಗತ್ತ್ರಿತಯಾಯ ಜಿತಾರಯೇ
ನಿಗಮ ವಾಕ್ಪಟವೇ ವಟವೇ ನಮಃ ॥

ಮಮ ಬ್ರಾಹ್ಮಣ್ಯಸಿದ್ಧ್ಯರ್ಥಂವಹಾಮಿ ತ್ವಾಮಂದ್ರಿತಃ।
ಪಾವಿತ್ರ್ಯಂ ಬಲಮಾಯುಷ್ಯಂ ಶ್ರಿಯಂ
ಕಾಂತಮರೋಗತಾಂ।
ಹರಿತದ್ಭಕ್ತಸೇವಾಂ ಚ ಸದಾ ಕುರು ಜಗತ್ಪ್ರಿಯ ॥

## ಧಾರಣ –

ನಂತರ ಬ್ರಾಹ್ಮಣರಿಬ್ಬರಿಗೆ ಯಥಾಶಕ್ತಿ ಜನಿವಾರ, ಗೋಪೀ ಚಂದನ, ದಕ್ಷಿಣೆಯನ್ನು ನೀಡಿ ಜನಿವಾರವನ್ನು ಧರಿಸುವುದು.

ಯಜ್ಞೋಪವೀತಿಮಿತಿ ಮಂತ್ರಸ್ಯ ಪರಬ್ರಹ್ಮಋಷಿ:
ಪರಮಾತ್ಮಾ ದೇವತಾ ತ್ರಿಷ್ಟುಪ್ಛಂಧ: ।
ಯಜ್ಞೋಪವೀತಧಾರಣೇ ವಿನಿಯೋಗ: ॥



ಓಂ ಯಜ್ಞೋಪವೀತಂ ಪರಮಂ ಪವಿತ್ರಂ
ಪ್ರಜಾಪತೇರ್ಯತ್ಸಹಜಂ ಪುರಸ್ತಾತ್ ।
ಆಯುಷ್ಯಮಗ್ರ್ಯಂ ಪ್ರತಿಮುಂಚಶುಭ್ರಂ
ಯಜ್ಞೋಪವೀತಂ ಬಲಮಸ್ತು ತೇಜ: ॥

(3 ಬಾರಿ ಈ ಮಂತ್ರವನ್ನು ಹೇಳಿ)
ಜನಿವಾರವನ್ನು ಧರಿಸಬೇಕು.
ಯಜ್ಞೋಪವೀತವನ್ನು ಒಂದಕ್ಕಿಂತ ಹೆಚ್ಚು ಧರಿಸುವವರು ಪ್ರತಿಯೊಂದು ಭಾರಿಯೂ ಆಚಮನ ಮಾಡಿ, ಈ ಮಂತ್ರವನ್ನು ಹೇಳುತ್ತಾ ಧರಿಸಬೇಕು.

ದ್ವಿತೀಯ ಯಜ್ಞೋಪವೀತಧಾರಣಕ್ಕೆ ಇದೇ ಮಂತ್ರವನ್ನು ಹೇಳಿ ಜೊತೆಗೆ – ಗೃಹಸ್ಥಾಶ್ರಮಸಿದ್ಧ್ಯರ್ಥೇ ದ್ವಿತೀಯ ಯಜ್ಞೋಪವೀತಧಾರಣಂ ಕರಿಷ್ಯೇ ॥

ತೃತೀಯ ಯಜ್ಞೋಪವೀತಕ್ಕೆ ಇದೇ ಮಂತ್ರದ ಜೊತೆಗೆ
ಉತ್ತರೀಯಾರ್ಥೇ ತೃತೀಯ ಯಜ್ಞೋಪವೀತ
ಧಾರಣಂ ಕರಿಷ್ಯೇ॥

ಚತುರ್ಥ ಯಜ್ಞೋಪವೀತಕ್ಕೆ ಇದೇ ಮಂತ್ರದ ಜೊತೆಗೆ ।
ಸಹಾಯಾರ್ಥಂ ಚತುರ್ಥ ಯಜ್ಞೋಪವೀತ
ಧಾರಣಂ ಕರಿಷ್ಯೇ ॥

(ನದೀ ಸ್ನಾನದಲ್ಲಿ ಅಥವಾ ಬನಿಯನ್ ತೆಗೆಯುವಾಗ ಜನಿವಾರ ಬಿದ್ದಾಗ, ಕಳೆದುಹೋದಾಗ, ಜನಿವಾರದ ಎಳೆಗಳು ಕಡೆದಾಗ ತಕ್ಷಣ ಶುದ್ಧಿಗಾಗಿ ಸಮೀಪದಲ್ಲಿರುವ ಬ್ರಾಹ್ಮಣರಿಂದ ಅವರು ಧರಿಸಿರುವ ಸಹಾಯಾರ್ಥ ಜನಿವಾರವನ್ನು ದಾನವಾಗಿ ಪಡೆಯುವುದು ಅವಶ್ಯ ಕರ್ತವ್ಯ)

## ಹಳೇ ಯಜ್ಞೋಪವೀತ ವಿಸರ್ಜನ –

(ಕನಿಷ್ಠ ಹತ್ತು ಗಾಯತ್ರಿ ಮಂತ್ರವನ್ನು ಹೇಳಿಕೊಂಡು)

ಉಪವೀತಂ ಭಿನ್ನತಂತುಂ ಜೀರ್ಣಂ ಕಶ್ಮಲದೂಷಿತಂ ।
ವಿಸೃಜಾಮಿ ಪರಬ್ರಹ್ಮಣ್ವರ್ಚೋ ದೀರ್ಘಾಯುರಸ್ತುಮೇ ।
"ಸಮುದ್ರಂ ಗಚ್ಛ ಸ್ವಾಹಾ" ಇತ್ಯುಕ್ತ್ವಾ ವಿಸೃಜೇತ್ ।
ಪುನರಾಚಮನಂ ।  ಮತ್ತೆ ಆಚಮನ ಮಾಡುವುದು

ಅಚ್ಯುತಾಯ ನಮಃ । ಅನಂತಾಯ ನಮಃ ।
ಗೋವಿಂದಾಯ ನಮಃ ।
ಅನೇನ ಯಜ್ಞೋಪವೀತಧಾರಣೇನ ಭಗವಾನ್
ಶ್ರೀಮನ್ ಮಧ್ವಾಂತರ್ಗತ ಶ್ರೀ ವಿಷ್ಣು ಪ್ರೇರಣಯಾ
ಶ್ರೀವಿಷ್ಣುಪ್ರೀತ್ಯರ್ಥಂ ಪ್ರೀತೋ ವರದೋ ಭವತು ।
ಶ್ರೀ ಕೃಷ್ಣಾರ್ಪಣಮಸ್ತು ॥

ಲೇಖಕರು –
ಮ.ಶಾ.ಸಂ ಶ್ರೀ ಎಸ್.ಎನ್. ರಾಮಚಂದ್ರಾಚಾರ್,
ನಿವೃತ್ತ ಪ್ರಾಧ್ಯಾಪಕರು, “ತಂತ್ರಸಾರಾಗಮ” ವಿಭಾಗ
ಮಹಾರಾಜ ಸಂಸ್ಕೃತ ಕಾಲೇಜು, ಮೈಸೂರು